# ಕಡಲೆಪುರಿ

ಜ. ಪಿ. ರಾಜರತ್ನಂ



ಪ್ರೋಗ್ರೆಸ್ ಬುಕ್ ಸ್ಟಾಲ್
ಮೈಸೂರು
೧೯೪೦

ಮೊದಲ ಮುದ್ರಣ—೧೯೩೩; ಎರಡನೆಯದು—೧೯೪



## ವಿವರ

# ಕನ್ನಡ ನಾಡಿನ ಕಂದನಿಗೆ

---

ಕುಣಿ ಕುಣಿ ಕಂದ ನೀ ಚಿಗಿದು!
ನಿನ್ನೊಡನಾಡುವೆ ನಾ ನೆಗೆದು!
ಹಾರೀ ಚಿಮ್ಮೀ ಚಿಮ್ಮೀ ಹಾರೀ
ಕೊನೆ ಮೊದಲಿಲ್ಲದೆ ಅನೇಕ ಸಾರಿ
ಕುಣಿ ಕುಣಿ ಕಂದ ಕೈ ತಟ್ಟಿ!
ಹಾಡನು ಹಾಡುವೆ ಮನಮುಟ್ಟಿ!

ಕುಣಿ ಕುಣಿ ಕಂದ ನೀ ಚಿಗಿದು!
ನಿನ್ನೊಡನಾಡುವೆ ನಾ ನೆಗೆದು!
ಮೇಲಕು ಕೆಳಕೂ ಎಡಕೂ ಬಲಕೂ
ಸುತ್ತಾ ಮುತ್ತಾ ಗಿರಿಗಿರಿ ತಿರುಗು!
ಕುಣಿ ಕುಣಿ ಕಂದ ಕೈ ತಟ್ಟಿ!
ಹಾಡನು ಹಾಡುವೆ ಮನಮುಟ್ಟಿ!

# ಕಡಲೆ ಪುರಿ

---

ಪುರಿ! ಪುರಿ! ಕಡಲೆಪುರಿ!
ಗರಂ ಗರಂ ಕಡಲೆಪುರಿ!
ಎಲ್ಲ ಬನ್ನಿ
ತೆಗೆದು ತಿನ್ನಿ
ಗರಂ ಗರಂ ಕಡಲೆ ಪುರಿ!
ಕಾಸಿಗೊಂದು ಸೇರು ಪುರಿ!

ಬಿಸಿ ಬಿಸಿ ಕಡಲೆ ಪುರಿ!
ಕರಂ ಕುರಂ ಕಡಲೆ ಪುರಿ!
ಕೊಬರಿ ಇಲ್ಲ!
ಇದೆ ಬೆಲ್ಲ!
ತಿನ್ನಿ! ತಿನ್ನಿ! ಕಡಲೆ ಪುರಿ!
ಕಾಸಿಗೊಂದು ಸೇರು ಪುರಿ!

ಮಕ್ಕಳಿಗೆ ತಕ್ಕ ಪುರಿ!
ಗರಂ ಗರಂ ಕಡಲೆ ಪುರಿ!
ಕಾಸೆ ಬೇಡ!
ತಿಂದು ನೋಡಿ!
ಬಿಸಿ ಬಿಸಿ ಕಡಲೆ ಪುರಿ!
ಕಾಸಿಗೊಂದು ಸೇರು ಪುರಿ!

# ಕುದುರೆ ಸವಾರಿ

---

ಚೆಡ್ಡಿ ಗಿಡ್ಡಿ ಹಾಕಿಕೊಂಡು
ಕುದುರೆ ಮೇಲೆ ಕುಳಿತುಕೊಂಡು
ಲಗಾಮು ಹಿಡಿದುಕೊಂಡು
ಹೈ! ಹೈ! ಹೈ!
ಲಂಗ ಗಿಂಗ ಹಾಕಿಕೊಂಡು
ಕುದುರೆ ಮೇಲೆ ಕುಳಿತುಕೊಂಡು
ಅಣ್ಣನ ಸೊಂಟ ಹಿಡಿದುಕೊಂಡು
ಹೈ! ಹೈ! ಹೈ!

ಕಂದು ಬಣ್ಣ ನಮ್ಮ ಕುದುರೆ
ಗಾಳಿ ಹಾಗೆ ಓಡೊ ಕುದುರೆ
ನಮ್ಮ ಕುದುರೆ! ನಮ್ಮ ಕುದುರೆ!
ಹೈ! ಹೈ! ಹೈ!
ಕುದುರೆ ಮೇಲೆ ಕುಳಿತುಕೊಂಡು
ಅದರ ಬೆನ್ನ ತಟ್ಟಿ ಕೊಂಡು
ಅಲ್ಲಿ ಇಲ್ಲಿ ಸುತ್ತಿ ಕೊಂಡು
ಹೈ! ಹೈ! ಹೈ!

ಕುದುರೆ ಮೇಲೆ ಕುಳಿತುಕೊಂಡು
ಹಳ್ಳ ಗಿಳ್ಳ ಹಾರಿಕೊಂಡು
ಮನೆಗೆ ಬಂದು ಸೇರಿಕೊಂಡು
ಹೈ! ಹೈ! ಹೈ!
ಕುದುರೆ ಮೈಯ ಸವರಿ ತಟ್ಟಿ
ಹುರುಳಿ ಗಿರಳಿ ತಂದು ಕೊಟ್ಟು
ಸಾಕುವೆವು ನಮ್ಮ ತಟ್ಟು
ಹೈ! ಹೈ! ಹೈ!

## ಕುರುಬನ ಕುರಿ

---

ಹೊಟ್ಟೆಯ ಹಸಿವಿಗೆ ಅಳುತ್ತ ಬಂದಿತು
ಕುರುಬನ ಕುರಿಯೊಂದು
ಅಳುವುದ ನಿಲ್ಲಿಸಿ ನಗುತ್ತ ಹೋಯಿತು
ಕಾಸಿನ ಪುರಿ ತಿಂದು

ಹೊಲಕ್ಕೆ ಹೋಗುವುದಿಲ್ಲವೆನುತ್ತ
ಕುಂಟಿತು ಕಳ್ಳ ಕುರಿ
ಕುರುಬನು ಗರುಕೆಯ ತಿನಿಸುವೆನೆನ್ನಲು
ಕುಣಿಯಿತು ಕಳ್ಳ ಕುರಿ

ಹೊಲದಲಿ ನಾಯಿಯ ಬಾಲವ ಹಿಡಿದು
ಎಳೆಯಿತು ತುಂಟ ಕುರಿ
ನಾಯಿಯು ತಿರುಗಲು ಥಂಗನೆ ಹಿಂದಕೆ
ಚಿಮ್ಮಿತು ತುಂಟ ಕುರಿ



ಬಸವನ ಹಿಂದಿನ ಬಾಲದ ಹಾಗೆ
ಕುರುಬನ ಹಿಂದುಗಡೆ
ಕುರಿಮರಿ ಕುಣಿಯುತ ನಡೆಯಿತು ಹಿಗ್ಗಿ
ಕುರುಬನ ಹಿಂದುಗಡೆ

# ತೂಗು ತೊಟ್ಟಿಲನು

---

ತೂಗು ತೊಟ್ಟಿಲನು ತೂಗು ತೊಟ್ಟಿಲನು
ನಮ್ಮ ಜಾಣಮರಿ ಮಲಗಲಿ
ತೂಗು ತೊಟ್ಟಿಲನು ಲಾಲಿ ಹೇಳುತಲಿ
ಸಣ್ಣ ರಾಗದಲಿ ದನಿಯಲಿ
ನಾಕು ಹಗ್ಗಗಳ ಹಿಡಿದು ತೂಗಿದರೆ
ಪುಟ್ಟ ತೊಟ್ಟಿಲಿನ ಸುತ್ತ ಕಟ್ಟಿರುವ
ಗೆಜ್ಜೆ ಗಂಟೆಗಳು ಅಲುಗಲಿ
ತೂಗು ತೊಟ್ಟಿಲನು ತೂಗು ತೊಟ್ಟಿಲನು
ನಮ್ಮ ಜಾಣಮರಿ ಮಲಗಲಿ



2

# ಒಂದು ಒಂದು ಎರಡು

---

ಬಂದ ಮಾತಿನ ಮಲ್ಲ
ಜತೆಗೆ ಯಾರೂ ಇಲ್ಲ
ಅವನು ಒಬ್ಬ ಒಂದು
ಒಂಟರ ಒಂಟಿ ಒಂದು

ಒಂಟರ ಒಂಟಿ ಒಂದು
ಅದೋ ಬಂದ ಚೆಂದು
ಚಾಪೆ ತಂದು ಹರಡು
ಒಂದು ಒಂದು ಎರಡು

ಒಂದು ಒಂದು ಎರಡು
ದೊಡ್ಡ ಚಾಪೆ ಹರಡು
ಬಂದ ರಾಮಾಚಾರಿ
ಎರಡು ಒಂದು ಮೂರು

ಎರಡು ಒಂದು ಮೂರು
ಹೂವು ಹತ್ತು ಮಾರು
ಮುಡಿದು ಬಂದಳು ಸಾಕು
ಮೂರು ಒಂದು ನಾಕು

ಮೂರು ಒಂದು ನಾಕು
ಮಾಡಿಕೊಂಡು ಜೋಕು
ಬಂದ ಹಳ್ಳಿ ಹೈದ
ನಾಕು ಒಂದು ಐದು

ನಾಕು ಒಂದು ಐದು
ಎಲ್ಲರನ್ನು ಬೈದು
ಬಿದ್ದ ಕಿಟ್ಟಿ ಜಾರಿ
ಐದು ಒಂದು ಆರು

ಐದು ಒಂದು ಆರು
ಹಳ್ಳ ಕೊಳ್ಳ ಹಾರಿ
ಓಡಿ ಬಂದ ಕಾಳ
ಆರು ಒಂದು ಏಳು

ಆರು ಒಂದು ಏಳು
ಗೋಳು—ಪೂರ ಗೋಳು
ಅಳುತ ಬಂದ ತುಂಟ
ಏಳು ಒಂದು ಎಂಟು

ಏಳು ಒಂದು ಎಂಟು
ಕೈಯಲ್ಲೊಂದು ಗಂಟು
ಹಿಡಿದು ಬಂದ ಸಂಪತ್ತು
ಎಂಟು ಒಂದು ಒಂಬತ್ತು

---

ಒಂದು—ಎರಡು—ಮೂರು
ನಾಕು—ಐದು—ಆರು
ಏಳು—ಎಂಟು—ಒಂಬತ್ತು
ಒಂಬತ್ತು ಒಂದು ಹತ್ತು

## ಗುಬ್ಬಿ

---

ನಮ್ಮ ಮನೆಯಲೊಂದು ಗುಬ್ಬಿ
ಗೂಡ ಕಟ್ಟಿತು
ಗೂಡಿನೊಳಗೆ ಹುಲ್ಲು ಹಾಸಿ
ಮೊಟ್ಟೆಯಿಟ್ಟಿತು.

ಮೊಟ್ಟೆಯೊಡೆದು ಒಳಗಿನಿಂದ
ಮರಿಯು ಬಂದಿತು
ಬಂದು ಬಾಯಿಬಿಟ್ಟು ಕೂಗಿ
ಕಿಚಿಪಿಚೆಂದಿತು.

ಮರಿಯ ಕೂಗ ಕೇಳಿ ತಾಯಿ
ಗೂಡ ಬಿಟ್ಟಿತು
ಹಾರಿ ಹೋಗಿ ಬಂದು ಮರಿಗೆ
ಗುಟುಕ ಕೊಟ್ಟಿತು.

ಗುಟುಕು ನುಂಗಿ ಮರಿಯ ರೆಕ್ಕೆ
ಬಲಿತುಕೊಂಡಿತು
ರೆಕ್ಕೆ ಬಡಿದು ಹಾರುವುದನು
ಕಲಿತುಕೊಂಡಿತು.

ಮರಿಯು ದೊಡ್ಡದಾಗಿ ಮೊದಲ
ಗೂಡ ಬಿಟ್ಟಿತು
ತನಗೆ ಒಂದು ಬೇರೆ ಗೂಡ
ತಾನೆ ಕಟ್ಟಿತು.

ತನ್ನ ತಿಂಡಿ ತಾನೆ ಹೋಗಿ
ತರುತಲಿದ್ದಿತು
ಮದುವೆ ಗಿದುವೆ ಮಾಡಿಕೊಂಡು
ಹಾಯಾಗಿದ್ದಿತು.

# ಪ್ರಾರ್ಥನೆ

ಮಲೆಗಳಲಿ ಕಲ್ಲುಂಟು
ಹೊಲಗಳಲಿ ಹುಲ್ಲುಂಟು
ಹೊಳೆಗಳಲಿ ಮೀನುಂಟು
ಗೂಡಿನಲಿ ಜೇನುಂಟು
ನೀನುಂಟು ಎಲ್ಲೆಲ್ಲೂ—ಓ ಶಿವ
ನೀನುಂಟು ಎಲ್ಲೆಲ್ಲೂ

ಬಾಳೆಯಲಿ ಫಲವುಂಟು
ಚಂದ್ರನಲಿ ಮೊಲವುಂಟು
ಹುತ್ತದಲಿ ಹಾವುಂಟು
ಬೆಂಕಿಯಲಿ ಕಾವುಂಟು
ನೀನುಂಟು ಎಲ್ಲೆಲ್ಲೂ—ಓ ಶಿವ
ನೀನುಂಟು ಎಲ್ಲೆಲ್ಲೂ

ದೀಪದಲಿ ಬೆಳಕುಂಟು
ಕೋಪದಲಿ ಹುಳುಕುಂಟು
ಸರುವ ಕಡೆ ನೀನುಂಟು
ಇರುವ ಕಡೆ ನಾನುಂಟು
ನೀನುಂಟು ಎಲ್ಲೆಲ್ಲೂ—ಓ ಶಿವ
ನೀನುಂಟು ಎಲ್ಲೆಲ್ಲೂ

# ಥೂ! ಥೂ! ಥೂ!

---

ಸುತ್ತಲೆತ್ತ ರಾಶಿ ಬರಿ
ಕತ್ತಲೆಯ ಕಡಲೆ ಪುರಿ!
ಏನು ಸದ್ದು? ನಾಯಿ ಮರಿ!
ಥೂ! ಥೂ! ಥೂ!

ಗೋಡೆ ಹತ್ತಿ ಹಾರುತಲಿ
ಕಳ್ಳ ಕಂಡಿ ದೂರುತಲಿ
ಬಂದನದೋ! ಹಾಕು ಬಲಿ!
ಥೂ! ಥೂ! ಥೂ!

ಕಚ್ಚ ಬೇಡ! ಹೆದರಿಸುತ
ಕಚ್ಚುವಂತೆ ಬೆದರಿಸುತ
ನುಗ್ಗು ಹಲ್ಲ ತೋರಿಸುತ
ಥೂ! ಥೂ! ಥೂ!

ನಿನ್ನ ಕೂಗಿಗವ ಜರುಗಿ
ಬಂದ ಹಾಗೆ ಹಿಂದಿರುಗಿ
ಓಡಲೇಳು! ಬಾಯ ತೆಗಿ!
ಥೂ! ಥೂ! ಥೂ!

# ನಮ್ಮ ಮನೆಯ ಸಣ್ಣ ಪಾಪ

ನಮ್ಮ ಮನೆಯಲೊಂದು ಸಣ್ಣ
ಪಾಪನಿರುವುದು
ಎತ್ತಿಕೊಳದೆ ಹೋದರದಕೆ
ಕೋಪ ಬರುವುದು



ಕೋಪ ಬರಲು ಗಟ್ಟಿಯಾಗಿ
ಕಿರಿಚಿಕೊಳುವುದು
ಕಿರಿಚಿಕೊಂಡು ತನ್ನ ಮೈಯ
ಪರಚಿಕೊಳುವುದು

ಮೈಯ ಪರಚಿಕೊಂಡು ಪಾಪ
ಅತ್ತು ಕರೆವುದು
ಅಳಲು ಕಣ್ಣಿನಿಂದ ಸಣ್ಣ
ಮುತ್ತು ಸುರಿವುದು

ಪಾಪ ಅತ್ತರಮ್ಮ ತಾನೂ
ಅತ್ತುಬಿಡುವಳು
ಅಯ್ಯೊ ಪಾಪ ಎಂದುಕೊಂಡು
ಮುತ್ತು ಕೊಡುವಳು

ಪಾಪ ಪಟ್ಟು ಹಿಡಿದ ಹಟವು
ಸಾರ್ಥವಾಯಿತು
ಕಿರಿಚಿ ಪರಚಿ ಅಳುವುದೆಲ್ಲ
ಅರ್ಥವಾಯಿತು.

# ಕಳ್ಳ ಮಲ್ಲ

ಜುಟ್ಟು ಮೀಸೆಯಿಟ್ಟುಕೊಂಡು
ಭಾರಿ ಕಳ್ಳ ಮಲ್ಲ
ಒಮ್ಮೆ ನಮ್ಮ ಮನೆಗೆ ಬಂದು
ಕದ್ದ ಉಂಡೆ ಬೆಲ್ಲ

ಕದಿಯಬಾರದೆಂದರೇನು—
ಮಲ್ಲ ಕೇಳಲಿಲ್ಲ
ಹಿಡಿಯಲೆಂದು ಹೋದರೆಲ್ಲಿ—
ಕೈಗೆ ಬೀಳಲಿಲ್ಲ

ಮನೆಗೆ ಹೋಗಿ ಕೇಳಿದರೆ—
'ಮಲ್ಲ ಮನೆಯಲಿಲ್ಲ'
ಇತ್ತ ನಮ್ಮ ಮನೆಗೆ ಬಂದು
ಅಕ್ಕಿ ಕದ್ದ ಮಲ್ಲ

ಕದಿಯಬೇಡವೆಂದೆನೆಷ್ಟೊ—
ಮಲ್ಲ ಕೇಳಲಿಲ್ಲ
ತಿರುಗಿ ಬಂದು ಕದ್ದು ಹೋದ
ಹತ್ತು ಕಂತೆ ಹುಲ್ಲ

ಮತ್ತೆ ಅವನ ಮನೆಗೆ ಹೋದೆ
‘ಮಲ್ಲ ಮನೆಯಲಿಲ್ಲ’
ಇತ್ತ ನಮ್ಮ ಮನೆಗೆ ಬಂದು
ಬೇಳೆ ಕದ್ದ ಮಲ್ಲ

ಮಲ್ಲನನ್ನು ಹುಡುಕಿ ಹುಡುಕಿ
ತಿರುಗಿ ಊರನೆಲ್ಲ
ಅಲೆದು ಅಲೆದು ಬಿದ್ದು ಹೋದೆ
ಮಲ್ಲ ಸಿಕ್ಕಲಿಲ್ಲ

ತಿರುಗಿ ಹೋದೆನವನ ಮನೆಗೆ
ಮಲ್ಲ ನಿದ್ರಿಸಿದ್ದ
ಕಳ್ಳ ಮಲ್ಲ ಎಂದು ಹಿಡಿದೆ—
ಮಲ್ಲ ಸಿಕ್ಕಿಬಿದ್ದ

ಜುಟ್ಟು ಹಿಡಿದುಕೊಂಡು ಚೆ-
ನ್ನಾಗಿ ಗುದ್ದು ಕೊಟ್ಟೆ
ಅಂದಿನಿಂದ ದೊಣ್ಣೆ ಮಲ್ಲ
ಕಳ್ಳತನವ ಬಿಟ್ಟ

# ಓಬೀರಾಯನ ಕಾಲದಲಿ

---

ಡನು ಹಾಡುವೆನೆಲ್ಲರು ಕೇಳಿ!
ಡುವುದನಾ ಹಾಡಲಿ ಹೇಳಿ!
ಹಿಂದಕೆ ಹೋಗುವೆ ಲೀಲೆಯಲಿ
ಓಬೀರಾಯನ ಕಾಲದಲಿ.

ೀರಾಯನ ಪಟ್ಟಣದಲ್ಲಿ
ರಿನ ಬೀದಿಯ ನೀರಿನ ನಲ್ಲಿ
ಸೊಟ್ಟಾಗಿದ್ದುದು ಸಾಲಿನಲಿ
ಓಬೀರಾಯನ ಕಾಲದಲಿ.

ಟ್ಟಿನ ನಲ್ಲಿಯ ನೀರನು ಕುಡಿದು
ಗಳು ಚಿತ್ರವಿಚಿತ್ರದಿ ನಡೆದು
ಹಾರುತ ನೆಗೆದರು ಗಾಳಿಯಲಿ
ಓಬೀರಾಯನ ಕಾಲದಲಿ.

ದಿಯ ಗುಡಿಸುವ ಬಸಲಿಂಗಪ್ಪ
ಡಿಸಿದನೂರಿನ ಬೀದಿಯ ದಪ್ಪ
ಹೇಸರಗತ್ತೆಯ ಬಾಲದಲಿ
ಓಬೀರಾಯನ ಕಾಲದಲಿ.

ದೇವರಿಗಾರತಿ ನಡೆಯುವುದೆಂದು
ಜನಗಳು ಗುಜುಗುಜು ನುಗ್ಗುತ ಬಂದು
ಜಾಗಟೆ ಬಡಿದರು ತಾಳದಲಿ
ಓಬೀರಾಯನ ಕಾಲದಲಿ.

ದೇವರ ಪ್ರಾರ್ಥನೆ ಮಾಡಲು ನಿಂತು
ಜನಗಳು ಹಾಡನು ಹಾಡಿದರಿಂತು :
“ಲಾಲಲ ಲಾಲಲ ಲಾಲ ಲಲಿ”
ಓಬೀರಾಯನ ಕಾಲದಲಿ.

ಅರ್ಚಕ ಜಿಪುಣ ಜನಾರ್ದನ ಭಟ್ಟ
ದೇವರ ಕುದಿಯುವ ತೀರ್ಥವ ಕೊಟ್ಟ
ಸೀಳಿದ ಬಿದಿರಿನ ಕೋಲಿನಲಿ
ಓಬೀರಾಯನ ಕಾಲದಲಿ.

ಜಿಪುಣ ಜನಾರ್ದನ ಭಟ್ಟನು ತನ್ನ
ಮೈಯಿಗೆ ಬಟ್ಟೆ, ಹೊಟ್ಟೆಗೆ ಅನ್ನ
ಗಿಟ್ಟಿಸುತಿದ್ದನು ಸಾಲದಲಿ
ಓಬೀರಾಯನ ಕಾಲದಲಿ.

ಕುತಕುತ ಕುದಿಯುತ ಮರಳುವ ನೀರ
ಜನಗಳು ಹೀರುತ ಕುಡಿದರು ಪೂರ
ಮಟಮಟ ನಡು ಮಧ್ಯಾಹ್ನದಲಿ
ಓಬೀರಾಯನ ಕಾಲದಲಿ.

ಗುಡಿಯಲಿ ಬಿಲಗಳೊಳಿಲಿಗಳ ನೋಡಿ
ಜನಗಳು ಹೆದರುತ ಕಿರಿಚುತ ಓಡಿ
ಅವಿತರು ಗೋಣಿಯ ಚೀಲದಲಿ
ಓಬೀರಾಯನ ಕಾಲದಲಿ.

ಇಲಿಗಳು ತಮ್ಮನು ಚೀಲಕೆ ತಳ್ಳಿ
ಜನಗಳಿಗಿಟ್ಟುವು ಚಕ್ಕಳಗುಳ್ಳಿ
ಕುಣಿದರು ಜನಗಳು ಮೇಳದಲಿ
ಓಬೀರಾಯನ ಕಾಲದಲಿ.

ಇಲ್ಲಿಗೆ ಹಾಡನು ನಿಲಿಸುವೆನಿಂದು
ತಿಳಿಯದು ಇನ್ನೇನಾಯಿತೊ ಅಂದು
ಮಾಸಿದ ಕಾಲದ ಜಾಲದಲಿ
ಓಬೀರಾಯನ ಕಾಲದಲಿ.

# ಕೂಸುಮರಿ

---

ಕೂಸುಮರಿ ! ಕೂಸುಮರಿ !
ಕೂಸುಮರಿ ಬೇಕೇ ಕೂಸುಮರಿ !
ಅಣ್ಣನ ಬೆನ್ನಿಗೆ ಮೈಯನು ಬೆಸೆದು
ಕತ್ತಿನ ಸುತ್ತಲು ಕೈಗಳನೆಸೆದು
ಸೊಂಟದ ಸುತ್ತಲು ಕಾಲನು ಬಿಗಿದು
ಅಣ್ಣನು ನೆಗೆದರೆ ತಾನೂ ನೆಗೆದು
ಮುದ್ದಾಗಿರುವುದು ಕೂಸುಮರಿ !
ಕನ್ನಡ ನಾಡಿನ ಕೂಸುಮರಿ !

ಕೂಸುಮರಿ ! ಕೂಸುಮರಿ !
ಕೂಸುಮರಿ ಬೇಕೇ ಕೂಸುಮರಿ !
ಕೆದರಿದ ಕೂದಲ ಮರೆಯಿಂದಿಣಿಕಿ
'ಐ ! ಐ !' ಎನ್ನುತ ಕಾಡುತ ಕೆಣಕಿ
ಬೆಳಗಿನ ಜಾವದ ಕತ್ತಲೆಯಲ್ಲಿ
ಎಳೆ ಬಿಸಿಲೆರಚುವ ಸೂರ್ಯನ ಹೋಲಿ
ಮುದ್ದಾಗಿರುವುದು ಕೂಸುಮರಿ !
ಕನ್ನಡ ನಾಡಿನ ಕೂಸುಮರಿ !

ಕೂಸುಮರಿ ! ಕೂಸುಮರಿ !
ಕೂಸುಮರಿ ಬೇಕೇ ಕೂಸುಮರಿ !
ಭೂಮಿಯ ಬಲೆಯಿಂದಾಕಾಶಕ್ಕೆ
ಸರ್ರೆಂದೇರುತ ಬಣ್ಣದ ರೆಕ್ಕೆ
ಹರಡುತ ಹಾಡುವ ಹಕ್ಕಿಯ ಹಾಗೆ
ಹರಡುತಲಿರುವುದು ಬೆನ್ನಿನ ಮೇಗೆ
ಕನ್ನಡ ನಾಡಿನ ಕೂಸುಮರಿ !
ಕೂಸುಮರಿ ಬೇಕೇ ಕೂಸುಮರಿ !



# ಒಂದು ಕತೆ

---

ಪಯಣಕೆ ನಿಂತಿತು
ಮಯಣದ ಗಾಡಿ!
ಒಂಟೆತ್ತಿನ ಗಾಡಿ!
ಗಾಡಿಯ ಮುಂದಿನ
ಜೋಡಿಯ ನೋಡಿ!
ಬೆಂಕಿಯ ಹಸು ಜೋಡಿ!

ಬಂಡಿಯಲೇನಿದೆ?
ಜೊಂಡು ಕಮಾನು!
ಹುಲ್ಲಿನ ಸಾಮಾನು!
ಬಂಡಿಯ ನಡೆಸಲು
ಗುಂಡಗೆ ಮೀನು!
ಕಂಡೆನು ಅದ ನಾನು!

ಹಸುಗಳ ಬೆಂಕಿಯ
ಬಿಸಿ ಬಿಸಿ ಸರಿದು
ಜೊಂಡೂ ಹುಲ್ಲುರಿದು
ಉರಿಯಲಿ ಮೇಣವು
ಕರಗಿತು ಹರಿದು!
ಮೀನೆಗರಿತು ಹುರಿದು!

# ರೋತೆ ರಾಮು

---

ಕೂಡಿ ಕಳೆವ ಲೆಕ್ಕವೆಲ್ಲ
ಹಾಳು ! ಥೂ ! ಅನಿಷ್ಟ !
ತಿಂದು ತಿಂದು ಮಲಗುವುದಕೆ
ನನಗೆ ಪೂರ ಇಷ್ಟ!

ಗುಣಿಸುವುದು ಭಾಗಿಸುವುದು
ಎಲ್ಲ ಬಲು ಪಜೀತಿ !
ತಿಂದು ಮಲಗಿ ಗೊರಕೆ ಬಿಡಲು
ನನಗೆ ತುಂಬ ಪ್ರೀತಿ!

ಲೆಕ್ಕ ಪಕ್ಕ ಆಟ ಪಾಟ
ಎಲ್ಲ ಪೂರ ಕಷ್ಟ !
ತಿಂದು ಹಾಗೆ ಗೊರಕೆ ಬಿಡುತ
ಮಲಗಲೇನು ನಷ್ಟ ?

ಆಟ ಪಾಟ ನನಗೆ ಬೇಡ
ಎಂದು ರೋತೆ ರಾಮು
ಮಲಗಿ ಮಲಗಿ ತಂದುಕೊಂಡ
ಮೈ ಕೈಗೆಲ್ಲ ಜೋಮು!

# ನವಿಲು

ಗಗನದೊಡಲು
ಗುಡುಗು ಸಿಡಿಲು-
ಗಳನು ಎಸೆದು ಬೆಳೆಸಿತು
ತಲೆಯ ಮೇಲೆ
ಮಾಲೆ ಮಾಲೆ-
ಯಾಗಿ ಮಿಂಚು ಥಳಿಸಿತು.

ಕಾಡಿನೊಂದು
ನವಿಲಿಗಂದು
ಬಹಳ ಹರುಷ ಬೆಳೆಯಿತು
'ಮಳೆಯ ಕಾಲ
ಬಂತು! ಭಲ!'
ಎಂದು ರಾಗ ಎಳೆಯಿತು.

ಚಾಚಿ ಎದೆಯ
ತಲೆಯ ತುದಿಯ
ಜುಟ್ಟನೊದರಿ ಕುಣಿಸಿತು
ಕಾಲ ನೂಕಿ
ತಾಳ ಹಾಕಿ
ಒಂದು ಎರಡು ಎಣಿಸಿತು.

ಗರಿಯ ಬಿಚ್ಚಿ
ದನಿಯ ಹೆಚ್ಚಿ -
ಸುತ್ತ ಕುಣಿದು ಮೆರೆಯಿತು
ಅದನು ಕಂಡು
ಮುಗಿಲ ಹಿಂಡು
ಹಿಗ್ಗಿ ಮಳೆಯ ಕರೆಯಿತು.



# ಕಳ್ಳ ರಂಗಪ್ಪ

---

ಕಳ್ಳ ರಂಗಪ್ಪನಿಗೆ ಸಿಹಿ ಬಹಳ ಇಷ್ಟ.
ಸಿಹಿ ಇಟ್ಟರವನೆದುರು ಉಳಿಯುವುದೆ ಕಷ್ಟ!

ಜೇನುಗೂಡಿನ ತುಂಬ ಸಿಹಿ ಜೇನುತುಪ್ಪ
ಇರುವುದನು ಕೇಳಿದ್ದ ಕಳ್ಳ ರಂಗಪ್ಪ !

'ಜೇನು ತುಪ್ಪವು ಬಿಟ್ಟ ಗೂಡಿನಲಿ ಸಿಕಲು
ಕಾಸುಕೊಟ್ಟದ ಕೊಳಲು ನನಗೆಲ್ಲಿ ತಿಕಲು'

ಎಂದು ಜೇನಿರಿಸಿದ್ದ ತುಪ್ಪವನು ಕಳಲು
ಕಾದಿದ್ದನಿಳಿವುದಕೆ ಕತ್ತಲೆಯ ನೆಳಲು.

ಕತ್ತಲಾಯಿತು ಮೇಲೆ ಲಕ್ಷ ನಕ್ಷತ್ರ!
ಕಳ್ಳತನ ಬಲು ಕೆಡುಕು! ರಂಗಪ್ಪ! ಭದ್ರ!

ಹಗಲೆಲ್ಲ ಹೂವುಗಳ ಸಾರವನು ಹೀರಿ
ರಾತ್ರೆ ಗೂಡನು ಜೇನು ಮುತ್ತಿತ್ತು ಸೇರಿ.

ಹಗಲೆಲ್ಲ ಅಲೆದಾಡಿ ದುಡಿದು ಸಾಕಾಗಿ
ರಾತ್ರಿಯಲಿ ಮಲಗಿತ್ತು ಜೇನು ಜೋಕಾಗಿ.

ಗೂಡಿಗಿಟ್ಟನು ಕಳ್ಳ ರಂಗಪ್ಪ ಕೈಯ!
ಅವನ ಕೈ ತಾಕಿತ್ತು ಜೇನುಗಳ ಮೈಯ!

ಜೇನುಗಳು ಒಟ್ಟಾಗಿ ಝ್ಯುಯೆಂದು ಎದ್ದು
'ಕಳ್ಳ! ಕಳ್ಳಾ!' ಎನಲು ಹೆಚ್ಚಿದುದು ಸದ್ದು!

ಸದ್ದ ಕೇಳಿದ! ಬಿದ್ದು ಓಡಿದನು ಕಳ್ಳ!
ತುಪ್ಪ ತಿನಲಿಲ್ಲವನು! ತಿಂದ ಬರಿ ಮುಳ್ಳ!



# ಪೀರ ಗಫೂರನ ಕುದುರೆಯು ಗಾಡಿ

---

ಪೀರ ಗಫೂರನ ಕುದುರೆಯು ನೋಡಿ!
ಪೀರ ಗಫೂರನ ಗಾಡಿಯು ನೋಡಿ!
ಎಲ್ಲಿದೆ ಪೀರನ ಗಾಡಿಯು ಜೋಡಿ
ಹೆಹ್ಹು! ಹೆಹ್ಹು! ಹೈ! ಹೈ! ಹೈ!

ಸಿಕ್ಕಲಿ ತಿಟ್ಟು ಸಿಕ್ಕಲಿ ಬೈಲು
ಗಾಡಿಯು ನಿಮಿಷಕೆ ಸಾವಿರ ಮೈಲು!
ಕುದುರೆಯ ಮುಂದೆ ಏತಕೆ ರೈಲು!
ಹೆಹ್ಹು! ಹೆಹ್ಹು! ಹೈ! ಹೈ! ಹೈ!

ಲಗಾಮು ಚಾವಟ ಕೈಯಿಗಳೊಳಗೆ
ಗಾಡಿಯಲಿದ್ದರೆ ಬಾಡಿಗೆ ಒಳಗೆ
ಹಾರಿತು ಕುದುರೆ ಒಂದೇ ಗಳಿಗೆ!
ಹೆಹ್ಹು! ಹೆಹ್ಹು! ಹೈ! ಹೈ! ಹೈ!

ಚಕ್ರದ ಕಟಕಟ ಕಟಕಟ ಸದ್ದು
ಕತ್ತಿನ ಗೆಜ್ಜೆಯ ಕಿಣಿಕಿಣಿ ಮುದ್ದು
ಕೇಳಲು ಕುದುರೆಯು ಹಾರುವ ಹದ್ದು!
ಹೆಹ್ಹು! ಹೆಹ್ಹು! ಹೈ! ಹೈ! ಹೈ!

ಕುದುರೆಯು ಪೀರ ಗಫೂರನದೆಂದು
ಚಕ್ರಗಳಿದ್ದರು ಗಾಡಿಯು ಹಿಂದು!
ಚಕ್ರಗಳಿಲ್ಲದ ಕುದುರೆಯೆ ಮುಂದು!
ಹೆಹ್ಹ! ಹೆಹ್ಹ! ಹೈ! ಹೈ! ಹೈ!

ಕುದುರೆಯು ಬೆನ್ನಿಗೆ ತಾಕಲು ಬಾರು
ಗಾಡಿಯೆ ನನ್ನದು ಮೋಟರು ಕಾರು!
ಡ್ರೈವರು ನಾನೇ ಪೀರ ಗಫೂರು!
ಹೆಹ್ಹ! ಹೆಹ್ಹ! ಹೈ! ಹೈ! ಹೈ!



ಬಿ. ಬಿ. ಡಿ. ಪವರ್ ಪ್ರೆಸ್, ಅರಳೇಪೇಟೆ, ಬೆಂಗಳೂರು ಸಿಟಿ.